# ಅವ್ವೈಯಾರ ಕೃತಿಗಳು

ಶ್ರೀ. ಎಲ್. ಗುಂಡಪ್ಪ, ಎಂ.ಎ.

---

## ೨ ಕೊನ್ರೈವೇನ್ದನ್

[ಇದು ಬಾಲಪಾಠದಲ್ಲಿ ಎರಡನೆಯ ಹಂತ. ಅತ್ತಿಸೂಡಿಗಿಂತ ದೊಡ್ಡದೊಡ್ಡ ವಾಕ್ಯಗಳಿವೆ. ಗಾದೆಗಳಂತೆ ಅನುಭವಸಾರವನ್ನು ಅಡಗಿಸಿ ಹೇಳುವ ೯೧ ವಚನಗಳನ್ನು ಒಳಕೊಂಡಿದೆ.
ಆತ್ತಿಸೂಡಿಯಂತೆಯೇ ಇದಕ್ಕೂ ಪ್ರಾರ್ಥನೆಯ ಪದ್ಯದ ಮೊದಲ ಪದದಿಂದ 'ಕೊನ್ರೈ ವೇನ್ದನ್' ಎಂದು ಹೆಸರು ಬಂದಿದೆ. ಇದರ ಅನುವಾದದಲ್ಲಿಯೂ 'ಅತ್ತಿಸೂಡಿ'ಯಲ್ಲಿ ಬಳಸಿದ ಕ್ರಮವನ್ನೇ ಬಳಸಿದೆ.]

### ದೇವರ ಪ್ರಾರ್ಥನೆ

ಕೊನ್ರೈ ವೇನ್ದನ್ ಶೆಲ್ವನಡಿಯಿಣೈ | ಎನ್ನುನೋತ್ತಿ ತ್ತೊಜುವೋಮಿಯಾಮೇ

ಕೊಂದೆ ಮಾಲೆ ಮುಡಿದ ದೊರೆಯ ಮಗನ ಅಡಿಗಳೆರಡುಮಂ
ಎಂದುಮೆಂದುಂ ನುತಿಸಿ ಪೂಜಿಸುವೆವು ನಾವು ಭಕ್ತಿಯಿಂ.

ಕೊಂದೆ = ಕಕ್ಕೆ. ಕಕ್ಕೆಯ ಹೂವು ಶಿವನಿಗೆ ಮೆಚ್ಚು. ಕೊಂದೆಮಾಲೆ ಮುಡಿದ ದೊರೆ=ಶಿವ. ಅವನಮಗ : ಗಣಪತಿ.

### ಗ್ರಂಥ

೧ ಅನ್ನೈಯುಂ ಪಿತಾವುಂ ಮುನ್ನರಿ ದೆಯ್ವಂ.

ಅಮ್ಮನೂ ಅಪ್ಪನೂ ಕಣ್ಣರಿವ ದೈವ.

ತಾಯಿಯೂ ತಂದೆಯೂ ಪ್ರತ್ಯಕ್ಷ ದೇವರು. "ಮಾತೃದೇವೋ ಭವ. ಪಿತೃದೇವೋ ಭವ"—ವೇದ.

೨ ಆಲಯಮ್ತೊಜುವದು ಶಾಲವುಂ ನನ್ರು.

ಆಲಯದಿ ಪೂಜಿಪುದು ಮಿಗಿಲು ಮೇಲಹುದು.

ಆಲಯ = ದೇವಸ್ಥಾನ.

೩ ಇಲ್ಲಱಮಲ್ಲದು ನಲ್ಲಱಮನ್ರು.

ಮನೆಯರವಲ್ಲದ್ದು ನಲ್ಲರವಲ್ಲ.

ಗೃಹಸ್ಥಧರ್ಮವಲ್ಲದ್ದು ಒಳ್ಳೆಯ ಧರ್ಮವಲ್ಲ. ಎಲ್ಲಾ ಆಶ್ರಮಧರ್ಮಗಳಿಗಿಂತಲೂ ಗೃಹಸ್ಥಾಶ್ರಮ ಧರ್ಮವೇ ಶ್ರೇಷ್ಠವಾದ್ದು ಎಂದು ತಾತ್ಪರ್ಯ.

೪ ಈಯಾರ್ ತೇಟ್ಟೈ ತ್ತೀಯಾರ್ ಕೊಳ್ವರ್.

ಈಯದರ ಗಳಿಕೆಯನು ಕೇಡಿಗರು ಕೊಳ್ಳುವರು

ಗಳಿಕೆ = ಗಳಿಸಿದ್ದು ; ಸಂಪಾದನೆ.

೫ ಉಣ್ಡಿ ಶುರುಙ್ಗುದಲ್ ಪೆಣ್ಡಿರ್ಕ್ಕಱಗು.

ಉಣಿಸು ಕೊರೆಮಾಡುವುದು ಹೆಂಗುಸರ್ಗೆ ಚೆಲುವು.

ಹೆಂಗಸು ಮಿತವಾಗಿ ಊಟಮಾಡುವುದೊಳ್ಳೆಯದು. ಮಿತಾಹಾರ ಎಲ್ಲರಿಗೂ ಒಳ್ಳೆಯದೇ ಆದರೂ ಹೆಂಗಸಿಗೆ ಬಹು ಮುಖ್ಯ ಎಂದು ಅಭಿಪ್ರಾಯ.

೬ ಊರುಡನ್ ಪಗೈಕ್ಕಿನ್ ವೇರುಡನ್ ಕೆಡುಮ್.

ಊರೊಡನೆ ಹಗೆಗೊಂಡರೆ ಬೇರೊಡನೆ ಕೆಡುವನು.

೭ ಎಣ್ಣುಮೆಜುತ್ತುಮ್ ಕಣ್ಣೆನತ್ತಗುಮ್.

ಎಣಿಕೆಯೂ ಅಕ್ಕರವೂ ಕಣ್ಣಿನ ತಕ್ಕುವು.

ಗಣಿತ ಸಾಹಿತ್ಯ ಎರಡೂ ಮನುಷ್ಯನಿಗೆ ಎರಡು ಕಣ್ಣುಗಳು—ಎನ್ನಿಸಿಕೊಳ್ಳುತ್ತವೆ.

೮ ಏವಾ ಮಕ್ಕಳ್ ಮೂವಾ ಮರುನ್ದು.

ಹೇಳದ ಮಕ್ಕಳು ಮುಪ್ಪೆಯ್ದದ ಮದ್ದು.

ಹೀಗೆಮಾಡೆಂದು ಹೇಳಬೇಕಾಗಿಲ್ಲದ, ಹೇಳದೆಯೆ ಇಂಗಿತವರಿತು ಕೆಲಸ ಮಾಡುವ ಮಕ್ಕಳು ಅವರ ತಂದೆ ತಾಯಿಗಳಿಗೆ ಮುಪ್ಪು ತರದಿರುವುದಕ್ಕೆ ಸಾಧಕವಾದ ಔಷಧ ; ಎಂದರೆ ಅಮೃತದಂತಿರುವರು.

೯ ಐಯಮ್ ಪುಗಿನುಮ್ ಶೆಯ್ವನ ಶೆಯ್.

ಭಿಕ್ಷಕೆ ಹೋದರೂ ಮಾಳ್ಪವ ಮಾಡು.

ಭಿಕ್ಷಕ್ಕೆ ಹೋಗಬೇಕಾದ ಸ್ಥಿತಿ ಬಂದರೂ ಮಾಡಬೇಕಾದ ಕರ್ತವ್ಯಗಳನ್ನು ಮಾಡಿಯೇ ತೀರಬೇಕು ; ಬಿಡಬಾರದು.

೧೦ ಒರುವನೈ ಪ್ಪತ್ರಿ ಯೋರಗತ್ತಿರು.

ಒಬ್ಬನ ನೆಮ್ಮಿ ಒಂದೆಡೆಯಿರು.

ಯೋಗ್ಯನಾದವನೊಬ್ಬನನ್ನು ಆಸರೆಯಾಗಿ ಹಿಡಿದುಕೊಂಡು ಒಂದು ಕಡೆ ವಾಸಮಾಡು.

೧೧ ಓದಲಿ ನನೇ ವೇದಿಯರ್ ಕ್ಕೊಜುಕ್ಕಮ್.

ಓದಿಗಿಂತ ನಲ್ಲದು ವೈದಿಕರ್ಗೆ ನಡತೆ.

ಬ್ರಾಹ್ಮಣನಿಗೆ ಆಚಾರ ಮುಖ್ಯ ; ಅವನಿಗೆ ವಿದ್ಯೆಕ್ಕಿಂತ ಆಚಾರವೇ ಮೇಲು. ಓದು = ವಿದ್ಯೆ. ನಲ್ಲದು = ಒಳಿಯದು ; ಶ್ರೇಯಸ್ಕರ.

೧೨ ಎವಿಯವರ್ ಪೇಶುದಲಾಕ್ಕತ್ತಿಕ್ಕಟಿವು.

ಕರುಬನಾಡುವುದು ಸಿರಿಗಳಿವಹುದು.

ಹೊಟ್ಟೆಕಿಚ್ಚಿನ ಮಾತಾಡುವುದರಿಂದ ಸಂಪತ್ತು ಅಭಿವೃದ್ಧಿ ಹೊಂದದೆ ಹಾಳಾಗಿ ಹೋಗುತ್ತದೆ.

೧೩ ಆಃಕವಮುಮ್ ಕಾಶುಮ್ ಶಿಕ್ಕೆನ ತ್ತೇಡು.

ಕಾಳನೂ ಕಾಸನೂ ಕಳೆಯದೆ ಕೂಡಿಡು.

೧೪ ಕಜ್ಪೆನಪ್ಪಡುವದು ಶೊಲ್ ಜಮ್ಬಾಮೈ.

ಕರ್ಪೆನಪಡುವುದು ಮಾತುಮೀರದಿರುವುದು.

ಕರ್ಪು = ಪಾತಿವ್ರತ್ಯ. ಗಂಡಸಿನ ನಿಷ್ಠೆಗೂ ಈ ಮಾತು ಅನ್ವಯಿಸುತ್ತದೆ. ಗಂಡಸಿಗಾಗಲಿ ಹೆಂಗಸಿಗಾಗಲಿ ಆಡಿದ ಮಾತನ್ನು ಮೀರದೆ ಇರುವುದು ನಿಷ್ಠೆ ಎನ್ನಿಸಿಕೊಳ್ಳುತ್ತದೆ.

೧೫ ಕಾವಜ್ತಾನೇ ಪಾವೈಯರ್ ಕ್ಕಜಗು.

ಕಾವಲು ತಾನೇ ಭಾಮೆಯರ್ಗೆ ಚೆಲುವು.

ಕಾವಲು = ಪಾತಿವ್ರತ್ಯವನ್ನು ಕಾದುಕೊಳ್ಳುವುದು. ಪಾತಿವ್ರತ್ಯ ರಕ್ಷಣೆಯೇ ಹೆಂಗಸಿಗೆ ನಿಜವಾದ ಸೌಂದರ್ಯ.

೧೬ ಕಿಟ್ಟಾದಾಯಿನ್ ವೆಟ್ಟೆನ ಮಜ.

ಸಿಕ್ಕದುದಾದರೆ ತಟ್ಟನೆ ಮರೆ.

ಬಯಸಿದ್ದು ದೊರೆಯದೆ ಹೋದರೆ, ಅದನ್ನೇ ನೆನೆದು ಕೊರಗುತ್ತಿರಬಾರದು. ಅದನ್ನು ಮರೆತುಬಿಡಬೇಕು.

೧೭ ಕೀಜೋರಾಯಿನುಮ್ ತಾಜ ವುರೈ.

ಕೀಳರಾದರೂ ತಗ್ಗಿಯೆ ನುಡಿ.

ತನಗಿಂತ ಕೆಳಅಂತಸ್ತಿನವರೊಡನೆಯೂ ನಮ್ರತೆಯಿಂದಲೇ ಮಾತನಾಡಬೇಕು.

೧೮ ಕುಜಮ್ಪಾರ್ಕ್ಕಿ ಜ್ಜಜಮಿಲ್ಲೈ.

ಕುಂದ ನೋಡಿದರೆ ಬಂಧುಗಳಿಲ್ಲ.

[ಕುಜಮ್ + ಪಾರ್ಕ್ಕಿನ್ + ಶುಜಮ್ + ಇಲ್ಲೈ]

೧೯ ಕೂರಮ್ಪಾಯಿನುಮ್ ವೀರಿಯಮ್ ಪೇಶೇಲ್.

ಕೂರಂಬಾದರೂ ವೀರ್ಯವನಾಡದಿರು.

ತನ್ನಲ್ಲಿ ಪ್ರಬಲ ಶಸ್ತ್ರಾಸ್ತ್ರಗಳಿದ್ದರೂ ತನ್ನ ಪರಾಕ್ರಮವನ್ನು ಹೊಗಳಿಕೊಳ್ಳಬಾರದು.

೨೦ ಕೆಡುವದು ಶೆಯ್ಯಿನ್ ವಿಡುವದು ಕರುಮಮ್.

ಕೆಡುವುದು ಗೈದರೆ ಬಿಡುವುದು ಕಾರ್ಯ.

ಯಾರಾದರೂ ತನಗೆ ಕೇಡು ಮಾಡಿದರೆ ಅವರ ಸಹವಾಸವನ್ನು ಬಿಡುವುದೇ ಸರಿಯಾದ ಕೆಲಸ. 'ತನಗೆ ಇತರರು ಕೆಟ್ಟದ್ದು ಮಾಡಿದರೆ ಅದನ್ನು ಮರೆತುಬಿಡಬೇಕು' ಎಂದೂ ಅರ್ಥ ಮಾಡುತ್ತಾರೆ.

೨೧ ಕೇಟ್ಟಿಲುಜುದಿ ಕೂಟ್ಟುಮುಡೈಮೈ.

ಕೇಡಿನಲಿ ಸ್ಥೈರ್ಯ ಕೂಡಿಸುವುದೊಡವೆಯ.

ಒಡವೆ = ವಸ್ತು, ಸಂಪತ್ತು. ಇದ್ದದ್ದು ಕಳೆದುಕೊಂಡು ಕೇಡು ಬಂದಾಗ ಮನಸ್ಸಿನ ಸ್ಥೈರ್ಯವನ್ನು ಕಳೆದುಕೊಳ್ಳದೆ ಇದ್ದರೆ ಆ ಸ್ಥೈರ್ಯವೇ ಸಂಪತ್ತನ್ನು ಮತ್ತೆ ಕೂಡಿಸುತ್ತದೆ.

೨೨ ಕೈಪ್ಪೊರುಡನ್ನಿನ್ ಮೆಯ್‌ಪ್ಪೊರುಳ್ ಕಲ್ವಿ.

ಕೈ ಪುರುಳಿಂದೆಯುಂ ನಿಜಪುರುಳ್ ಕಲ್ವಿ.

ಕೈಯಲ್ಲಿರುವ ಹಣಕ್ಕಿಂತ ಹೆಚ್ಚು ನಿಜವಾದ ಧನ ವಿದ್ಯೆ. (ಪುರುಳ್ = ವಸ್ತು; ಧನ. ಕಲ್ವಿ = ವಿದ್ಯೆ).

೨೩ ಕೊಜವನಜಿದ ಉಜಿಡತ್ತುದವಿ.

ದೊರೆಯರಿದಿರುವುದು ಬಂದೆಡೆ ನೆರವು.

ಬಂದೆಡೆ = ಆಪತ್ತು ಬಂದಾಗ. ದೊರೆಗೆ ತಿಳಿದವರಾಗಿರುವುದರಿಂದ ಕಷ್ಟಕಾಲದಲ್ಲಿ ಸಹಾಯವಾಗುತ್ತವೆ.

೨೪ ಕೋಟ್ಟೆವಿಕ್ಕು ಅಳ್ಳೈ ಕ್ಕಾಜುಡ ನೆರುಪ್ಪು.

ಪಿಸುಣ್ಗಿವಿಗೆ ಚಾಡಿ ಗಾಳಿಗೂಡಿದ ಬೆಂಕೆ.

ಪಿಸುಣ್ಗಿವಿ = ಚಾಡಿ ಮಾತ್ತು ಕೇಳುವ ಕಿವಿ.

೨೫ ಕೌಲ್ಲಿನೆವ್ವರುಕ್ಕುಮ್ ಪಗೈ.

ನಿಂದೆಯ ನುಡಿದರೆ ಎಲ್ಲರಿಗೂ ಹಗೆ.

೨೬ ಶನ್ದದಿಕ್ಕಟಗು ವಜ್ಜಿ ಶೆಯ್ಯಾಮೈ.

ಸಂತತಿಗೆ ಚೆಲುವು ಬಂಜೆಗೈಯದಿರುವುದು.

ಹೆಂಡತಿಯನ್ನು ಬಿಟ್ಟು ಎಲ್ಲೋ ಇರದೆ ಅವಳೊಡನೆ ಬಾಳಿ ಮಕ್ಕಳನ್ನು ಪಡೆಯುವುದು ಸಂತತಿಗೆ ಸೊಗಸು.

೨೭ ಶಾನ್ಱೋರೆನ್ಗೈ ಯಿಜ ಸೋಟ್ಟೆಟಗು.

ಸಂಪನ್ನರೆನ್ನುವುದು ಹೆತ್ತವಳ್ಗೆ ಚೆಲುವು.

ತನ್ನ ಮಕ್ಕಳನ್ನು 'ಇವರು ಸಂಪನ್ನರು' ಎಂದು

ಅರಿತವರು ಅನ್ನುವುದು, ಅವರನ್ನು ಹೆತ್ತ ತಾಯಿಗೆ ಸೊಗಸು.

೩೮ ಶಿವತ್ತೈ ಪ್ಪೇಣಿ ಱವತ್ತಿಱ್ಕೞಗು.

ಶಿವನ ಸೇವಿಸಲು ತಪಕ್ಕೆ ಚೆಲುವು.

೩೯ ಶೀರ್ಮೈ ತ್ತೇಡಿ ನೇರ್ಮೈ ತ್ತೇಡು.

ಸುಖವನರಸೆ ಉಳುಮೆಯನರಸು.

ಸುಖ ಬೇಕಾದರೆ ಉಳುಮೆ ಮಾಡು. ವ್ಯವಸಾಯ ವೃತ್ತಿಯೇ ಸುಖಕ್ಕೆ ಸಾಧನ—ಎಂದು ತಾತ್ಪರ್ಯ.

೪೦ ಶುಱ್ಱತ್ತಿಱ್ಕೞಗು ಶೂೞ ಇರುತ್ತಲ್.

ನಂಟಿಗೆ ಚೆಲುವು ಸುತ್ತ ಸೇರಿಹುದು

ಬಂಧುಗಳೆಲ್ಲರನ್ನೂ ಜೊತೆ ಸೇರಿಸಿಕೊಂಡು ಅವರ ನಡುವೆ ಬಾಳುವುದೇ ನಂಟತನಕ್ಕೆ ಸಾರ್ಥಕ.

೪೧ ಶೂದುಮ್ ವಾದುಮ್ ವೇದನೈ ಶೆಯ್ಯುಮ್.

ಜೂದೂ ವಾದವೂ ವೇದನೆ ಗೈವುವು.

ಜೂಜಾಡುವುದೂ ವಾದಮಾಡುವುದೂ ಸಂಕಟ ವುಂಟುಮಾಡುತ್ತದೆ.

೪೨ ಶೆಯ್ದವ ಮಱನ್ದಾಱ್ ಕೈದವಮಾಳುಮ್.

ಗೈವ ತಪವನ್ ಮರೆಯೆ ಕೈತವವಾಳ್ವುದು.

ಕೈತವ= ವಂಚನೆ. ಒಬ್ಬನು ತಾನು ಮಾಡುತ್ತಿರುವ ತಪಸ್ಸನ್ನು ಮರೆತುಬಿಟ್ಟರೆ, ವಂಚನೆ ಅವನ ಮೇಲೆ ಅಧಿಕಾರ ನಡಸುತ್ತವೆ; ಅವನು ವಂಚಕನಾಗುತ್ತಾನೆ.

೪೩ ಶೇಮಮ್ ಪುಗಿನುಮ್ ಯಾಮತ್ತುಱಙ್ಗು.

ಸೆರೆಯ ಪೊಕ್ಕರೂ ಯಾಮದಿ ಮಲಗು.

[ಪಾಠಾಂತರ: ಶೇಮಮ್ ಪುಗಿನಮ್ ಶಾಮತ್ತುಱಙ್ಗು.
ಕಾಪು ಸೇರಿದರೂ ನಡುವಿರುಳ್ ಮಲಗು.]

೪೪ ಶೈಯೊತ್ತಿರುನ್ದಾಲ್ ಐಯಮಿಟ್ಟುಣ್.

ಸಿರಿ ನೆರೆದಿದ್ದರೆ ಭಿಕ್ಷವಿಟ್ಟುಣ್ಣು.

೪೫ ಶೊಕ್ಕರೆನ್ಬವರತ್ತಮ್ ಪೆಱುವಾರ್.

ಚೊಕ್ಕವರೆಂಬವರರ್ಥವ ಪಡೆವರು.

ಚೊಕ್ಕವರು=ಪರಿಶುದ್ಧರು. ಅರ್ಥ:—ಪುರುಷಾರ್ಥಗಳು. 'ಧನವುಳ್ಳವರು ಉಳಿದ ಪುರುಷಾರ್ಥಗಳನ್ನು ಪಡೆಯುತ್ತಾರೆ' ಎಂದೂ, 'ಉದ್ಯೋಗಶೀಲರು ಧನ ಪಡೆಯುತ್ತಾರೆ' ಎಂದೂ ಅರ್ಥಮಾಡುವುದುಂಟು.

೪೬ ಶೋಮ್ಬುರೆನ್ಬವರ್ ತೇಮ್ಬಿತ್ತಿರಿವಾರ್.

ಅಲಸರೆಂಬವರಳಲಿ ಅಲೆವರು.

೪೭ ತನ್ದೈಶೊಲ್ಮಿಕ್ಕ ಮನ್ದಿರಮಿಲ್ಲೈ.

ತಂದೆಸೊಲ್ಲಿಂ ಮಿಕ್ಕ ಮಂತ್ರವಿಲ್ಲ.

ತಂದೆಯ ಮಾತಿಗಿಂತ ಹೆಚ್ಚಿನ ಮಂತ್ರವಿಲ್ಲ. (ಸೊಲ್ = ಮಾತು)

೪೮ ತಾಯಿಱ್ ಶಿಱನ್ದ ಕೋಯಿಲುಮಿಲ್ಲೈ.

ತಾಯಿಂದ ಮಿಗಿಲಾದ ಗುಡಿಯೊಂದುಮಿಲ್ಲ.

೪೯ ತಿರೈಗಡಲೋಡಿಯುಮ್ ದ್ದಿರವಿಯನ್ದೇಡು.

ತೆರೆಗಡಲೋಡಿಯೂ ದ್ರವ್ಯವ ಗಳಿಸು.

ತೆರೆಯೆದ್ದು ಬಿದ್ದು ಅಪಾಯಕಾರಿಯಾದ ಸಮುದ್ರದ ಮೇಲೆ ಪ್ರಯಾಣ ಮಾಡಿಯಾದರೂ ಹಣವನ್ನು ಸಂಪಾದಿಸು.

೫೦ ತೀರಾ ಕ್ಕೋಪಂ ಪೋರಾ ಮುಡಿಯುಮ್.

ತೀರದ ಕೋಪ ಹೋರಾಗಿ ಮುಗಿವುದು.

ಹೋರು = ಹೋರಾಟ, ಕಲಹ. ತಣಿಯದ ಕೋಪ ಕಲಹಕ್ಕೆ ಕಾರಣವಾಗುತ್ತದೆ. ಕೋಪವನ್ನು ಅಡಗಿಸಿಕೊಳ್ಳದಿದ್ದರೆ ಕಲಹವಾಗಿಯೇ ತೀರುತ್ತದೆ.

೫೧ ತುಡಿಯಾ ಪ್ಪೆಣ್ಡಿರ್ ಮಡಿಯಿಱ್ ನೆರುಪ್ಪು.

ತುಡಿಯದ ಹೆಂಡಿರು ಮಡಿಲಲಿ ಬೆಂಕಿ.

ಗಂಡನ ಕಷ್ಟದಲ್ಲಿ ಮರುಗದ ಹೆಂಡತಿ ಮಡಿಲಲ್ಲಿ ಕಟ್ಟಿಕೊಂಡ ಬೆಂಕಿಯ ಹಾಗೆ.

೫೨ ತೂಱುಮ್ ಪೆಣ್ಡಿರ್ ಕೂಱ್ಱೆನತ್ತಗುಮ್.

ದೂರುವ ಹೆಂಡಿರು ಯಮನೆನೆ ತಕ್ಕವರ್.

ಗಂಡಂದಿರ ಮೇಲೆ ತಪ್ಪು ಹೊರಿಸಿ ದೂರುವ ಹೆಂಡಿರನ್ನು ಆ ಗಂಡಂದಿರಿಗೆ ಯಮ ಎನ್ನಬಹುದು.

೫೩ ತೆಯ್ವಮ್ ಶೀಱಿಱ್ ಕೈದವಮಾಳುಮ್.

ದೈವ ಮುಳಿದರೆ ಕೈತಪವಳಿವುದು.

ದೈವ ಕೋಪಿಸಿದರೆ ಸಿದ್ಧವಾಗಿ ಕೈಯಲ್ಲಿರುವ ತಪಸ್ಸಿನ ಫಲವೂ ಹಾಳಾಗುತ್ತದೆ.

೫೪ ತೇಡಾದೞಿಕ್ಕಿಱ್ ಶಾಡಾ ಮುಡಿಯುಮ್.

ಗಳಿಸದೆ ಅಳಿದರೆ ದುಗುಡದೆ ಮುಡಿವುದು.

ಅಳಿದರೆ = ಬಳಸಿ ನಾಶಮಾಡಿದರೆ. ಇರುವ ಸಂಪತ್ತನ್ನೇ ಬಳಸಿ ತಿನ್ನುತ್ತಾ ಮತ್ತೆ ಸಂಪಾದಿಸದೆ ಇದ್ದರೆ, ಕಡೆಗೆ ಕಷ್ಟದಲ್ಲೇ ಕೊನೆಯಾಗುತ್ತದೆ.

೫೫ ತೈಯುಮ್ ಮಾಶಿಯುಮ್ ವೈಯಗತ್ತುಱಙ್ಗು.

ತೈಯಲೂ ಮಾಶಿಯಲೂ ಹುಲ್ಮನೆಯೊಳ್ಮಲಗು.

ತೈಮಾಶಿ = ಪುಷ್ಯ, ಮಾಘ ಮಾಸಗಳು [ಜನವರಿ ೧೫ರಿಂದ ಮಾರ್ಚಿ ೧೫ರವರೆಗೆ]. ಈ ತಿಂಗಳುಗಳು ಚಳಿ

ಗಾಲ. ಆಗ ಹುಲ್ಲು ಹೊದಸಿದ ಗುಡಿಸಲಿನಲ್ಲಿ ಮಲಗಿದರೆ ಬೆಚ್ಚಗಿರುತ್ತದೆ.

೪೬ ತೊೞುದೂಣ್ ಚುವೈಯಿ ನುೞುದೂಣಿನಿದು.

ಊಳಿಗದುಣಿಸಿನ ಸವಿಯಿಂದುತ್ತುಣಿಸಿನಿದು.

ಮತ್ತೊಬ್ಬರನ್ನು ಸೇವಿಸಿ ಊಟಮಾಡುವ ರಸಗವಳದ ರುಚಿಗಿಂತ ತಾನೇ ಉತ್ತು ಬೆಳೆದು ತಿನ್ನುವ ಕದನ್ನದ ರುಚಿಯೇ ಹೆಚ್ಚು.

೪೭ ತೋೞನೋಡು ಮೇೞೈಮೈ ಪೇಶೇಲ್.

ಗೆಳೆಯನೊಡನೆಯೂ ಬಡತನ ಹೇಳಬೇಡ.

೪೮ ನಲ್ಲಿಣಕ್ಕಮಿಲ್ಲದಲ್ಲಲ್ಪಡುತ್ತುಮ್.

ಒಳ್ಳೆ ಜೊತೆಯಲ್ಲದ್ದು ಸಂಕಟಪಡಿಸುವುದು.

ದುಷ್ಟರ ಸಹವಾಸ ದುಃಖಕ್ಕೆ ಗುರಿಮಾಡುತ್ತದೆ: ಸಂಗತಿ ಕೆಟ್ಟುದು ಸಂಕಟಪಡಿಕುಂ.

೪೯ ನಾಡೆಙ್ಗುಮ್ ವಾೞ ಕ್ಕೇಡೊನ್ರುಮಿಲ್ಲೈ.

ನಾಡೆಲ್ಲ ಬಾಳಿದರೆ ಕೇಡೊಂದುಮಿಲ್ಲ.

೫೦ ನಿಱ್ಕ ಕ್ಕಱ್ಱಲ್ ಶೊಲ್‌ತಿಱಮ್ಬಾಮೈ.

ನಿಲ್ಲೆ ಕಲಿವುದು ಸೊಲ್ ತಪ್ಪದಿಹುದು.

ಜ್ಞಾನ ನೆಲೆನಿಲ್ಲುವಂತೆ ಕಲಿಯುವುದು ಎಂದರೆ ಆಡಿದ ಮಾತು ತಪ್ಪದೆ ಇರುವುದು. 'ಸೊಲ್ ತಪ್ಪದಿರುವುದು' ಎಂಬುದಕ್ಕೆ 'ಅವರಾಡಿದ ಮಾತು ಹುಸಿಯಾಗದೆ ಫಲಕಾರಿಯಾಗುತ್ತದೆ' ಎಂದೂ, 'ಅವರು ಆಡಿದ ಮಾತಿಗೆ ತಪ್ಪದೆ ನಡೆದುಕೊಳ್ಳುವರು' ಎಂದೂ ಅರ್ಥಮಾಡಬಹುದು.

೫೧ ನೀರಗಮ್ ಪೊರುನ್ದಿಯ ವೂರಗತ್ತಿರು.

ನೀರ್ ನೆರೆದುಳ್ಳ ಊರೊಳಗಿರು.

ನೆರೆದುಳ್ಳ = ತುಂಬಿರುವ. ಜಲಸಮೃದ್ಧಿಯಿರುವ ಊರಿನಲ್ಲಿ ವಾಸಮಾಡು.

೫೨ ನುಣ್ಣಿಯ ಕರುಮಮುಮ್ ಎಣ್ಣಿ ತ್ತುಣಿ.

ಸಣ್ಣ ಕಾರ್ಯವನೂ ಎಣಿಸಿ ನಿಶ್ಚಯಿಸು.

ಸಣ್ಣ ಕೆಲಸವೆಂದು ಉದಾಸೀನಮಾಡದೆ ಚೆನ್ನಾಗಿ ಆಲೋಚಿಸಿ ನಿಶ್ಚಯಿಸಬೇಕು.

೫೩ ನೂನ್ಮುಱೈ ತೆರಿನ್ದು ಶೀಲತ್ತೊೞುಗು.

ಶಾಸ್ತ್ರಕ್ರಮವರಿತು ಶೀಲದಲಿ ನಡೆ.

೫೪ ನೆಞ್ಜೈಯೊಳಿತ್ತೊರು ವಞ್ಜಗಮಿಲ್ಲೈ.

ಮನಕೆ ಮರೆಗೈದೊಂದು ವಂಚನೆಯುಮಿಲ್ಲ.

ತನ್ನ ಮನಸ್ಸಿಗೆ ಗೋಚರವಾಗದೆಹೋಗುವ ವಂಚನೆ ಒಂದೂ ಇಲ್ಲ. ವಂಚಕನಿಗೆ ತಾನು ಮಾಡುವ ವಂಚನೆಗೊತ್ತೇ ಇರುತ್ತದೆ.

೫೫ ನೇರಾ ನೋನ್ಬು ಶೀರಾಗಾದು.

"ಒಪ್ಪದ ನೋಂಪಿ ಒಪ್ಪವೆ ಆಗದು.

ನೋಂಪಿ= ವ್ರತ; ತಪಸ್ಸು. ಮನಸ್ಸೊಪ್ಪಿ ಮಾಡದ ತಪಸ್ಸು ಚೆನ್ನಾಗುವುದಿಲ್ಲ; ಫಲಪ್ರದವಾಗಿ ಮುಗಿಯುವುದಿಲ್ಲ.

೫೬ ನೈಬವರೆನಿನುಮ್ ನೊಯ್ಯವುರೈಯೇಲ್.

ಕೀಳರೆ ಆದರೂ ಕೀಳ್ನುಡಿಯದಿರು.

'ನೋವರೆ ಆದರೂ . . .' ಎಂದೂ ಅರ್ಥಮಾಡಬಹುದು. ಪ್ರತಿಭಟಿಸಿ ನುಡಿಯದೆ ಮನಸ್ಸಿನಲ್ಲಿ ನೊಂದುಕೊಳ್ಳುವರಾದರೂ ಅಂಥವರ ವಿಷಯದಲ್ಲಿ ಕೀಳುಮಾತಾಡಬಾರದು—ಎಂದು ಅಭಿಪ್ರಾಯ.

೫೭ ನೊಯ್ಯವರೆನ್ಬವರ್ ವೆಯ್ಯವರಾವರ್.

ಅಲ್ಪರೆಂಬವರ್ ಕ್ರೂರಿಗಳಾದವರ್.

ಕ್ರೂರಿಗಳೇ ಅಲ್ಪರು—ಎಂದು ಅಭಿಪ್ರಾಯ. ಇದನ್ನು ಬೇರೊಂದು ರೀತಿಯಲ್ಲಿಯೂ ವಿವರಿಸುತ್ತಾರೆ. ಆಕಾರಾದಿಗಳಲ್ಲಿ ಅಲ್ಪರಾಗಿ ಕಾಣುವವರೂ ಅವರ ಕಾರ್ಯಾದಿಗಳಿಂದ ಎಲ್ಲರ ಗಮನವನ್ನೂ ಸೆಳೆಯುವಂಥವರಾಗುತ್ತಾರೆ.

೫೮ ನೋನ್ಬೆನ್ಬದುವೇ ಕೊನ್ರು ತಿನ್ನಾಮೈ.

ನೋಂಪಿಯೆಂಬುದೇ ಕೊಂದು ತಿನ್ನದುದು. ನೋಂಪಿ = ವ್ರತ.

೫೯ ಪಣ್ಣಿಯ ಪಯಿರಿಲ್ ಪುಣ್ಣಿಯಮ್ ತೆರಿಯುಮ್.

ಪಣ್ಣಿದ ಪಯಿರಿಂ ಪುಣ್ಯಂ ತಿಳಿಗುಂ.

ಪಣ್ಣಿದ = ಮಾಡಿದ ; ತಿಳಿಗುಂ = ತಿಳಿಯುತ್ತದೆ.

೬೦ ಪಾಲೋಡಾಯಿನುಮ್ ಕಾಲಮಱಿನ್ದುಣ್.

ಹಾಲೊಡನಾದರೂ ಕಾಲವರಿದುಣ್ಣು.

೬೧ ಪಿಱನ್ ಮನೈ ಪುಗಾಮೈ ಯಱಮೆನತ್ತಗುಮ್.

ಹೆರಮಡದಿ ಹೊಗದಿಹುದು ಅರಮೆನ್ನ ತಕ್ಕುದು.

ಹೆರಮಡದಿ = ಬೇರೊಬ್ಬನ ಹೆಂಡತಿ; ಅರ = ಧರ್ಮ. ಪರಸ್ತ್ರೀ ಸಂಗಮಾಡದಿರುವುದು ಧರ್ಮ ಎನ್ನಿಸಿಕೊಳ್ಳುತ್ತದೆ.

೬೨ ಪೀರಮ್ ಪೇಣಿ ಪಾರಮ್ ತಾಙ್ಗುಮ್.

ಮೊಲೆಹಾಲ ಕುಡಿದವನು ಭಾರವನು ತಾಳುವನು.

೬೩ ಪುಲೈಯುಙ್ಗೊಲೈಯುಮ್ ಕಳವುಮ್ ತವಿರ್.

ಅಡಗನು ಕೊಲೆಯನು ಕಳವನು ತೊರೆ.

ಅಡಗು = ಮಾಂಸ.

೬೪ ಪೂರಿಯೋರ್ಕ್ಕಿಲ್ಲೈ ಶೀರಿಯವೊಳುಕ್ಕಮ್.
ಕೀಳರ್ಗಿಲ್ಲ ಮೇಲಾಚಾರ.

೬೫ ಪೆಱೋರ್ಕ್ಕಿಲ್ಲೈ ಕುಱವುಂ ಞಾನಮುಮ್.
ಪಡೆದವರ್ಗಿಲ್ಲ ಬಳಗವೂ ಸಿಟ್ಟೂ.

ತತ್ತ್ವಜ್ಞಾನವನ್ನು ಪಡೆದವರಿಗೆ ಬಂಧುಗಳ ಮೇಲೆ ಆಸೆಯೂ, ಅಲ್ಲದವರ ಮೇಲೆ ಕೋಪವೂ ಇಲ್ಲ. ಜ್ಞಾನಿಗಳಿಗೆ ರಾಗದ್ವೇಷಗಳಿಲ್ಲ.

೬೬ ಪೇದೈಮೈಯೆನ್ಪದು ಮಾದರ್ಕ್ಕಣಿಗಲಮ್.
ಮುಗ್ಧತೆಯೆಂಬುದು ಮಡದಿಯ ಗೌರವ.

೬೭ ಪೈಯಚ್ಚೆನ್ರಾಲ್ ಪೈಯನ್ರಾಜ್ಙಮ್.
ಮೆಲ್ಲನೆ ನಡೆದರೆ ಲೋಕವೆ ತಾಳ್ವದು.

ಮೃದುವಾಗಿ ಸನ್ಮಾರ್ಗದಲ್ಲಿ ನಡೆದರೆ ಅವನನ್ನು ಲೋಕವೇ ಆದರಿಸುವುದು.

೬೮ ಪೊಲ್ಲಾಙ್ಗೆನ್ಪವೈ ಯೆಲ್ಲಾನ್ದವಿರ್.
ಹೊಲ್ಲವು ಎಂಬವನೆಲ್ಲವ ತೊರೆ.
ಹೊಲ್ಲವು = ಕೆಟ್ಟವು.

೬೯ ಪೋನಗಮೆನ್ಪದು ತಾನುಣ್ದುಣ್ಣಲ್.
ಭೋಜನವೆಂಬುದು ತಾನುತ್ತುಂಬುದು.

೭೦ ಮರುನ್ದೇಯಾಯಿನುಮ್ ವಿರುನ್ದೊಡುಣ್.
ಅಮರ್ದೇ ಆದರೂ ಬಿರ್ದೊಡನುಣ್ಣು.
ಅಮರ್ದು = ಅಮೃತ. ಬಿರ್ದು = ಅತಿಥಿ.

೭೧ ಮಾರಿಯಲ್ಲದು ಕಾರಿಯಮಿಲ್ಲೈ.
ಮೋಡವಿಲ್ಲದೆ ಕಾರ್ಯವೆ ಇಲ್ಲ.

೭೨ ಮಿನ್ನುಕ್ಕೆಲ್ಲಾಮ್ ಪಿನ್ನುಕ್ಕು ಮಳೈ.
ಮಿಂಚುಗಳ್ಗೆಲ್ಲಾ ಹಿಂದೆಯೆ ಮಳೆ.

ಮಿಂಚು ಮುಂದೆ ಬರುವ ಮಳೆಗೆ ಸೂಚನೆ. ಹಾಗೆಯೇ ಒಬ್ಬನ ಉತ್ಸಾಹ ಮೊದಲಾದ್ದು ಅವನಿಗೆ ಮುಂದೆ ಬರುವ ಮೇಲ್ಮೆಗೆ ಸೂಚನೆ—ಎಂದು ಭಾವ.

೭೩ ಮೀಹಾಮನಿಲ್ಲಾ ಮರಕ್ಕಲಮೋಡಾದು.
ಚಾಲಕನಿಲ್ಲದ ಹಡಗು ನಡೆಯದು.

೭೪ ಮುಱ್ಪಗಲ್ ಶೆಯಿಱ್ ಪಿಱ್ಪಗಲ್ ವಿಳೈಯುಮ್.
ಮುಂಬಗಲ್ ಗೆಯ್ವೊಡೆ ಹಿಂಬಗಲ್ ಬಳೆಗುಂ.

ಬೆಳಗ್ಗೆ ಮಾಡಿದರೆ ಸಂಜೆಗೇ ಅದರ ಫಲ ಕಾಣಿಸಿಕೊಳ್ಳುತ್ತದೆ. ಕರ್ಮಫಲ ಬಹು ಬೇಗ ಬರುತ್ತದೆ.

೭೫ ಮೂತ್ತೋರ್ ಶೊನ್ನ ವಾರ್ತ್ತೈ ಯಮಿರ್ದಮ್.
ಮುತ್ತವರಾಡಿದ ಮಾತದು ಅಮೃತ.

ಮುತ್ತವರು = ಮುಪ್ಪು ಬಂದವರು. ಅನುಭವಸ್ಥರಾದ ಹಿರಿಯರ ಮಾತು ಅಮೃತದಂತೆ ಶುಭಕಾರಿ.

೭೬ ಮೆತ್ತೈಯಿಱ್ ಪಡುತ್ತು ನಿತ್ತಿರೈಕ್ಕೊಳು
ಮೆತ್ತೆಯಲಿ ಮಲಗುವುದು ನಿದ್ರೆಗೆ ಸೊಗಸು.

೭೭ ಮೇಱ್ಚೆಲ್ವಮ್ ಕೋಱ್ಪಡಾದು.
ನೇಗಿಲ ಸಂಪತ್ತಳಿವು ಹೊಂದದು.

ಉಳುಮೆಯಿಂದ ಸಂಪಾದಿಸಿದ ಐಶ್ವರ್ಯ ನಾಶವಾಗುವುದಿಲ್ಲ.

೭೮ ಮೈವಿಱಿಯಾರ್ ತಮ್ ಮನೈಯಗನ್ರೊಳುಗು.
ಕಾಡಿಗೆಗಣ್ಣಿಯರ ಮನೆ ಬಿಟ್ಟು ನಡೆ.
ವೇಶ್ಯೆಯರ ಸಹವಾಸ ಮಾಡಬೇಡ.

೭೯ ಮೊೞಿವದು ಮಱುಕ್ಕಿನಱಿವದು ಕರುಮಮ್.
ಹೇಳುವುದ ಮೀರಿದರೆ ಹಾಳಹುದು ಕಾರ್ಯ.

ಹಿರಿಯರ ಹಿತವಚನವನ್ನು ಮೀರಿ ನಡೆದರೆ ಕೆಲಸ ಕೆಡುತ್ತದೆ.

೮೦ ಮೋನಮೆನ್ಪದು ಞಾನವರಮ್ಪು.
ಮೌನವೆಂಬುದು ಜ್ಞಾನದ ಎಲ್ಲೆ.

೮೧ ವಳವನಾಯಿನುಮಳವಱಿನ್ದೀತ್ತುಣ್.

ವಳವನಾದರೂ ಅಳವರಿತು ಬಳಸಿಯುಣ್. 'ವಳವ' ಎಂಬುದು ಚೋಳರಾಜರ ಬಿರುದು. ಚೋಳರಾಜನ ಹಾಗೆ ಅಷ್ಟೈಶ್ವರ್ಯ ಸಂಪನ್ನನಾದರೂ ಆದಾಯಕ್ಕೆ ತಕ್ಕಂತೆ ಸರಿಹೊಂದಿಸಿಕೊಂಡು ವ್ಯಯ ಮಾಡಬೇಕು.

೮೨ ವಾನಙ್ಗುರೈಯಿಱ್ ಱಾನಙ್ಗುರೈಯುಮ್.
ಮಳೆ ಕುಂದಿದರೆ ದಾನ ಕುಂದುವುದು.

[ವಾನಮ್ + ಕುರೈಯಿನ್ + ತಾನಮ್ + ಕುರೈಯುಮ್]

೮೩ ವಿರುನ್ದಿಲೋರ್ಕ್ಕಿಲ್ಲೈ ಪೊರುನ್ದಿಯ ವೊೞುಕ್ಕಮ್.
ಬಿರ್ದಿಲ್ಲದರ್ಗಿಲ್ಲ ಹೊಂದುವಾಚಾರ.

ಬಿರ್ದು = ಅತಿಥಿ. ಅತಿಥಿ ಸತ್ಕಾರ ಮಾಡದವರು ಗೃಹಸ್ಥಧರ್ಮಕ್ಕೆ ಹೊಂದುವ ಸದಾಚಾರ ಇಲ್ಲದವರಾಗುತ್ತಾರೆ.

೮೪ ವೀರನ್ ಕೇಣ್ಮೈ ಕೂರ್ವಾಳಾಗುಮ್.
ವೀರನ ಗೆಳೆತನ ಕೂರಂಬಹುದು.

ವೀರನ ಸ್ನೇಹವೊಂದಿದ್ದರೆ ಸಾಕು, ಅದೇ ಒಬ್ಬ

ನಿಗೆ ಕೈಯಲ್ಲಿ ಹರಿತವಾದ ಬಾಣವಿದ್ದ ಹಾಗೆ ರಕ್ಷಣೆಯಾಗುವುದು.

೮೫ ಉರವೋರೆನ್ಱು ಯಿರವಾದಿರುತ್ತಲ್.

ಬಲ್ಲಿದರೆಂಬುದು ಎರೆಯದೆ ಇರುವುದು.

ಎರೆ=ಬೇಡು. ಇನ್ನೊಬ್ಬರನ್ನು ಬೇಡದೆ ಇರುವುದೇ ನಿಜವಾಗಿ ಸಾಮರ್ಥ್ಯವೆನ್ನಿಸಿಕೊಳ್ಳುತ್ತದೆ.

೮೬ ಊಕ್ಕಮುಡೈಮೈ ಯಾಕ್ಕತ್ತಿಱ್ಕಳಗು.

ಉತ್ಸಾಹವಂತಿಕೆ ಸಿರಿತನಕೆ ಸೊಬಗು.

ಉತ್ಸಾಹವಿದ್ದರೆ ಸಂಪತ್ತು ಸಾಧಿಸುತ್ತದೆ.

೮೭ ವೆಳ್ಳೈಕ್ಕಿಲ್ಲೈ ಕಳ್ಳಚ್ಚಿನ್ದೈ.

ಬೆಳ್ಳನಿಗಿಲ್ಲ ಕಳ್ಳಚಿಂತೆ.

ಮನಸ್ಸು ಶುದ್ಧವಾಗಿರುವಾತನಿಗೆ ವಂಚನೆಯ ಯೋಚನೆಯೇ ಇಲ್ಲ (ಬೆಳ್ಳ = ಮನಸ್ಸಿನಲ್ಲಿ ಕಳಂಕವಿಲ್ಲದವನು).

೮೮ ವೇನ್ದನ್ ಶೀಱಿನ್ ನಾನ್ದುಣೈ ಯಿಲ್ಲೈ.

ಅರಸ ಕೋಪಿಸಿದರೆ ಆಗುವ ನೆರವಿಲ್ಲ.

ಆಗುವ = ಆ ಸಮಯಕ್ಕೆ ಒದಗುವ; ರಕ್ಷಕನಾಗುವ.

೮೯ ವೈಯನೋಱು ನ್ದೆಯ್ವನೋಱು.

ಯೆಡೆಯೆಡೆಯಲ್ಲೂ ದೈವವನರ್ಚಿಸು.

ಎಲ್ಲ ಕ್ಷೇತ್ರಗಳಲ್ಲಿಯೂ ದೇವರನ್ನು ಪೂಜಿಸು.

೯೦ ಒತ್ತವಿಡತ್ತು ನಿತ್ತಿರೈ ಕೊಳ್.

ಸಮವಾದೆಡೆಯಲಿ ನಿದ್ರೆಯ ಮಾಡು.

ಉಬ್ಬುತಗ್ಗುಗಳಿಲ್ಲದ ಸಮಸ್ಥಲದಲ್ಲಿ ಮಲಗಿ ನಿದ್ದೆ ಮಾಡು.

೯೧. ಓದಾದಾರ್ಕ್ಕಿಲ್ಲೈ ಯುಣರ್ವೊಡು ವೊಱುಕ್ಕಮ್.

ಓದದವರ್ಗಿಲ್ಲ ಅರಿವೂ ನಡತೆಯೂ.

ಸೂಕ್ಷ್ಮ ವಿಷಯಗಳನ್ನು ಗ್ರಹಿಸಿ ಭಾವಿಸಿಕೊಳ್ಳುವ ಶಕ್ತಿ ಮತ್ತು ಒಳ್ಳೆಯ ನಡತೆ—ಎರಡೂ ಶಾಸ್ತ್ರಜ್ಞಾನ ಇಲ್ಲದವರಲ್ಲಿ ಕಾಣುವುದಿಲ್ಲ.

ಕೊನ್ಱೈ ವೇನ್ದನ್ ಮುಗಿಯಿತು.

---

## ಸ್ವದೇಶ ವಂದನಂ

ಮೂಲ ತಮಿಳುಗೀತದ ಕವಿ: ಭಾರತಿಯಾರ್. ಅನುವಾದಕ: ಶ್ರೀ ಎಲ್. ಗುಂಡಪ್ಪ

ತಂದೆಯುಂ ತಾಯುಂ ಸಂತಸಗೊಂಡು ಹಿಗ್ಗುತ
ಬಾಳ್ದುದುಮಿೂ ನಾಡೇ—ಅವರ
ಹಿಂದಣರ್ ಸಾಸಿರ ವರ್ಷಗಳ್ ಬಾಳಿ
ಮಡಿದುದುಮಿೂ ನಾಡೇ—ಅವರ
ಚಿಂತೆಯೊಳ್ ಸಾಸಿರ ಎಣಿಕೆಗಳ್ ಬೆಳೆದು
ಮೆರೆದುದುಮಿೂ ನಾಡೇ—ಇದನ್
ವಂದನೆ ಹೇಳಿ ಮನದಲಿರಿಸಿಯೆನ್ನ
ಬಾಯ್ತುಂಬ ಹೊಗಳೆನೋ—ಇದನ್
ವಂದೇ ಮಾತರಂ ವಂದೇ ಮಾತರಂ
ಎಂದು ವಂದಿಸದಿಹೆನೋ!

ಇನಿಯುಸಿರಿತ್ತೆಮ್ಮ ಹೆತ್ತು ಬೆಳಸಿ ಕೃಪೆ
ಯಿತ್ತುದುಮಿೂ ನಾಡೇ—ನಮ್ಮ
ತಾಯ್ಮಿರುಮುದಿಸಿ ತೊದಲುಲಿಗಳನಾಡಿ
ಅರಿದುದು ಮಿೂ ನಾಡೇ—ಅವರ್
ಕನ್ನೆಯರಾಗಿ ಬೆಳ್ದಿಂಗಳೊಳಾಡಿ
ತಣಿದುದುಮಿೂ ನಾಡೇ—ತಮ್ಮ
ಹೊನ್ನೊಡಲ್ ಸೊಗವೇರೆ ನೀರಾಟವಾಡಿ ಮನೆ
ಗೈದಿದುದು ಮಿೂ ನಾಡೇ—ಇದನ್

(ವಂದೇ ಮಾತರಂ)

ಮುದದಿಯರಾಗವರ್ ಮನೆಯರವನೊಪ್ಪಾಗಿ
ನಡೆಸಿದುದುಮಿೂ ನಾಡೇ—ಅವರ್
ಹೊನ್ನು ಮಗಂದಿರ ಹೆತ್ತಮುದ್ದಾಡಿ
ತಬ್ಬಿದ್ದು ಮಿೂ ನಾಡೇ—ಜನರ್
ಉನ್ನತಿವೆತ್ತೇರಿ ಬೆಳಗೆಂದು ಗುಡಿಗಳನ್
ಬಳಸಿದ್ದುಮಿೂ ನಾಡೇ—ಬಳಿಕ
ಅಲ್ಲಿ ಅವರಳಿಯೆ ಅವರೊಡಲ್ ಹೂಗಳ
ತೊಡಿಸಿದ್ದುಮಿೂ ನಾಡೇ—ಇದನ್
ವಂದೇ ಮಾತರಂ ವಂದೇ ಮಾತರಂ
ಎಂದು ವಂದಿಸದಿಹೆನೋ!

# ಅವ್ವೈಯಾರ ಕೃತಿಗಳು

ಶ್ರೀ ಎಲ್. ಗುಂಡಪ್ಪ, ಎಂ.ಎ.

## ೩. ಮುದುವೊರೆ (ಮುಂದುವರಿದುದು)

೨೦

ಒಡಹುಟ್ಟಿದವರು ಬಂಧುಗಳಲ್ಲ

ಉಡನ್ ಪಿಱನ್ದಾರ್ ಶುಱತ್ತಾರೆನ್ನಿರುಕ್ಕವೇಣ್ಡಾ.
ಉಡನ್ ಪಿಱನ್ದೇ ಕೊಲ್ಲುಮ್ ವಿಯಾಧಿ.–ಉಡನ್ ಪಿಱವಾ
ಮಾಮಲೈಯಿಲುಳ್ಳ ಮರುನ್ದೇ ಪಿಣಿದೀರ್ಕ್ಕುಮ್.
ಅಮ್ಮರುನ್ದು ಪೋಲ್ವಾರುಮುಣ್ಡು.

ಒಡಹುಟ್ಟಿದವರು ಬಂಧುಗಳು ಎಂದಿರಬೇಡ.
ಒಡನೆ ಹುಟ್ಟಿಯೆ ಕೊಲ್ಗು ವ್ಯಾಧಿ.–ಒಡಹುಟ್ಟದೆ
ಮಾಮಲೆಯಲಿಹ ಮದ್ದೆ ನೋವ ಪರಿಹರಿಸುವುದು.
ಆ ಮದ್ದ ಹೋಲುವರುಮುಂಟು.

ಕೊಲ್ಗು = ಕೊಲ್ಲುತ್ತದೆ. ಮಾಮಲೆ= ಮಹಾಪರ್ವತ; ದೊಡ್ಡಬೆಟ್ಟ. ಮದ್ದು= ಔಷಧಿ. ನೋವು= ರೋಗ.

೨೧

ಒಳ್ಳೆ ಹೆಂಡತಿ ಇಲ್ಲದ ಮನೆ ಹುಲಿಯ ಗವಿ

ಇಲ್ಲಾಳಗತ್ತಿರುಕ್ಕ ಇಲ್ಲಾದದೊನ್ನಿಲ್ಲೈ.
ಇಲ್ಲಾಳುಮ್ ಇಲ್ಲಾಳೇಯಾಮಾಯಿನ್,–ಇಲ್ಲಾಳ್
ವಲಿಕಿಡನ್ದ ಮಾಱುಮುಱೈಕ್ಕುಮೇಲ್, ಅವ್ವಿಲ್
ಪುಲಿಕಿಡನ್ದ ತೂಱಾಯ್ ವಿಡುಮ್

ಮನೆಯವಳು ಒಳಗಿರಲು ಇಲ್ಲದ್ದು ಒಂದಿಲ್ಲ.
ಮನೆಯವಳು ಇಲ್ಲಳೇ ಆದರೆ,–ಮನೆಯವಳು
ಕಟುತೆ ತುಂಬಿದ ಮಾತನಾಡಿದರೆ, ಆ ಮನೆ
ಹುಲಿ ಕೆಡೆದ ಗವಿಯಾಗಿ ಬಿಡುಗು.

ಮನೆಯವಳು: ಹೆಂಡತಿ; ಗೃಹಿಣಿ. ಇಲ್ಲಳೇ ಆದರೆ: ಇಲ್ಲದವಳೇ ಆದರೆ; ಇಲ್ಲವಾದರೆ. ಕೆಡೆದ =ಮಲಗಿದ. ಬಿಡುಗು= ಬಿಡುತ್ತದೆ. "ಗೃಹಿಣೀ ಗೃಹಮುಚ್ಯತೇ."

೨೨

ಅದೃಷ್ಟವಿದ್ದಷ್ಟೇ ಫಲ

ಎಱುದಿಯವಾಱೇ ಕಾಣ್ ಇರಱ್ಗು ಮಡನೆಞ್ಜೇ;
ಕರುದಿಯ ವಾಱಾಮೋ ಕರುಮಮ್?-ಕರುದಿ ಪ್ಪೋಯ್
ಕ್ಕಱ್ಪಗತ್ತೈ ಚ್ಚೇರ್‌ನ್ದೋರ್‌ಕ್ಕು ಕ್ಕಾಞ್ಜಿರಙ್ಗಾ ಯಾನ್ದದೇಲ್
ಮುಱ್ಪವತ್ತಿಲ್ ಚೆಯ್ದ ವಿನೈ.

ಬರೆದ ಹಾಗೆಯೆ ಕಾಣ, ಮರುಗುವ ಮರುಳ್ಮನವೆ;
ನೆನೆದ ಹಾಗಾಗುವುದೆ ಕರ್ಮ?–ನೆನೆದೈದಿ
ಕಲ್ಪಕವ ಸೇರ್ದರ್ಗೆ ಕಾಂಜಿರಕಾಯ್ದೊಟ್ಟರೆ,
ಮುನ್ನ ಭವದಲಿ ಗೈದ ಕರ್ಮ.

ಕಲ್ಪಕ: ಕಲ್ಪವೃಕ್ಷ. ಕಾಂಜಿರಕಾಯ್: ಹೊರನೋಟಕ್ಕೆ ಚೆನ್ನಾಗಿದ್ದು ವಿಷಮಯವಾದ ಒಂದು ಬಗೆಯ ಕಾಯಿ.

೨೩

ಉತ್ತಮರ ಕೋಪ ಬೇಗ ಮರೆಯಾಗುತ್ತದೆ

ಕಱ್ಪೇಳವೋಡೊಪ್ಪರ್ ಕಯವರ್ ಕಡುಞ್ಜಿನತ್ತು.
ಪ್ಪೊಱ್ಪೇಳವೋಡೊಪ್ಪಾರುಮ್ ಪೋಲ್ವಾರೇ.–ವಿಱ್ಪಿಡಿತ್ತು
ನೀರ್‌ಕ್ಕಿರಿಱಿಯವೆಯ್ದ ವಡುಪ್ಪೋಲ ಮಾಱುಮೇ
ಶಿರೊಱುಗು ಶಾನ್ದೋರ್ ಶಿನಮ್.

ಕಲ್ ಸೀಳಿಗೆಣೆಯಹರು ನೀಚರು ಕಡು ಮುಳಿದು.
ಹೊನ್ ಸೀಳಿಗೆಣೆಯಹರುಮೆಣೆಯಪ್ಪರು.–ಬಿಲ್ವಿಡಿದು
ನೀರ್ ಸೀಳಲಾದ ಗಾಯದ ಹಾಗೆ ಮಾರ್ಪಡುಗು
ಮೇಲ್‌ನಡೆಯ ಸಂಪನ್ನರ್ಗೊಗೆದ ಮುನಿಸು.

ಮುಳಿದು= ಕೋಪಿಸಿ. ಮಾರ್ಪಡುಗು= ಮಾರ್ಪಡುವುದು. ಒಗೆದ = ಹುಟ್ಟಿದ. ಕಲ್ಲು ಸೀಳಿದರೆ ಮತ್ತೆ ಕೂಡಿಸಲಾಗುವುದಿಲ್ಲ. ಚಿನ್ನ ಸೀಳಿದರೆ ಸುಲಭವಾಗಿ ಕೂಡಿಸಬಹುದು. ಹಾಗೆಯೇ ನೀಚರ ಮತ್ತು ಉತ್ತಮರ ಕೋಪ.

೨೪

ತಮ್ಮಂಥವರೇ ತಮಗೆ ಜೊತೆ

ನಱುಮಲರ್‌ತ್ತಡಾಕತ್ತಿಲ್ ನಲ್ಲನ್ನ ಞ್ಜೇರ್‌ನ್ದಾಱ್ಪೋಲ್
ಕಱ್ಱಾರೈ ಕ್ಕಱ್ಱಾರೇ ಕಾಮುಱುವಾರ್.–ಕಱ್ಪಿಲಾ

ಮೂರ್ಕ್ಕರೈ ಮೂರ್ಕ್ಕರ್ ಮುಗಪ್ಪರ್.
ಮುದುಗಾಟ್ಟಿಲ್
ಕಾಕ್ಕೈ ಯುಗಕ್ಕುಮ್ ಪಿಣಮ್.

ನಲ್ಲ ತಾವರೆಗೊಳದಿ ನಲ್ಲಂಚೆ ಸೇರ್ದಂತೆ
ಕಲ್ತವರನ್ ಕಲ್ತವರೆ ನೆರೆ ಬಯಸುವರ್.—ಕಲಿವಿರದ
ಮೂರ್ಖರನ್ ಮೂರ್ಖರೇ ಬಯಸುವರು.
ಸುಡುಗಾಡೊಳ್
ಕಾಗೆ ಬಯಸುವುದು ಹೆಣವಂ.

ನಲ್ಲ=ಒಳ್ಳೆಯ. ನಲ್ಲಂಚೆ= ಒಳ್ಳೆಯ ಹಂಸ. ಕಲಿವು= ವಿದ್ಯೆ.

೨೫

ಒಳ್ಳೆಯವರಿಗೆ ಭಯವಿಲ್ಲ, ಕೆಟ್ಟವರಿಗೆ ಧೈರ್ಯವಿಲ್ಲ

ನಞ್ಜುಡೈಮೈ ತಾನಱಿನ್ದು ನಾಗಙ್ಗರನ್ದುಱೈಯುಮ್.
ಅಞ್ಞಾಪ್ಪುಱಙ್ಗಿಡಕ್ಕುಮ್ ನೀರ್ಪ್ಪಾಮ್ಬು.—
ನೆಞ್ಜಿಲ್
ಕರವುಡೈಯಾರ್ ತಮ್ಮೈಕ್ಕರಪ್ಪರ್ ಕರವಾರ್
ಕರವಿಲಾ ನೆಞ್ಜತ್ತವರ್.

ನಂಜಿಹುದ ತಾನರಿದು ನಾಗ ವಾಸಿಪುದಡಗಿ.
ಅಂಜದೆಯೆ ಹೊರಗೆ ಕೆಡೆವುದು ನೀರ ಹಾವು —
ಮನದಿ
ಮರೆಯುಳ್ಳವರು ತಮ್ಮನಡಗಿಪರು. ಅಡಗಿಸರು
ಮರೆಯಿಲ್ಲದಿಹ ಮನದವರ್.

ನಂಜು= ವಿಷ. ನಾಗ= ನಾಗರಹಾವು. ಮರೆ= ವಂಚನೆ. ತಮ್ಮನಡಗಿಪರು= ತಾವು ಅಡಗಿ ಮರೆಯಾಗುತ್ತಾರೆ.

೨೬

ವಿದ್ಯಾವಂತನಿಗೆ ದೊರೆಗಿಂತ ಹೆಚ್ಚು ಮಹಿಮೆ

ಮನ್ನನು ಮಾಚಱ ಕ್ಕಱೋನುಞ್ಜೀರ್ ತೂಕ್ಕಿನ್
ಮನ್ನನಿಱ್ ಕಱ್ಱೋನ್ ಶಿಱಪ್ಪುಡೈಯನ್.—ಮನ್ನಱ್ಕು
ತ್ತನ್‌ದೇಶಮಲ್ಲಾಱ್ ಚಿಱಪ್ಪಿಲ್ಲೈ. ಕಱ್ಱೋರ್ಕ್ಕು
ಚ್ಚೆನ್ಱ ಇಡಮೆಲ್ಲಾಞ್ಜಿಱಪ್ಪು.

ದೊರೆಯ ಮಾಸಿರದೆ ಕಲ್ತವನ ನೆರೆ ತೂಗಿದರೆ
ದೊರೆಗಿಂತ ಕಲ್ತವನೆ ಮೇಲ್ಮೆಯುಳ್ಳವನು—ದೊರೆಗೆ
ತನ್‌ನಾಡೊಳಲ್ಲದೆ ಮಹಿಮೆಯಿಲ್ಲ. ಕಲ್ತವಗೆ
ಹೋದ ಎಡೆಯೆಲ್ಲ ಮಹಿಮೆ.

ಮಾಸು= ಕೊಳೆ; ದೋಷ. ಮಾಸಿರದೆ ಕಲ್ತವನು: ಸಂದೇಹ ಮುಂತಾದ ಯಾವ ದೋಷವೂ ಇಲ್ಲದಂತೆ ಚೆನ್ನಾಗಿ ಕಲಿತವನು, ವಿದ್ವಾಂಸ.

"ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ"

೨೭

ಮೃತ್ಯು

ಕಲ್ಲಾದ ಮಾನ್ದರ್ಕ್ಕು ಕಱ್ಱಱಿನ್ದಾರ್ ಕೂಱ್ಱಮ್.
ಅಲ್ಲಾದ ಮಾನ್ದರ್ಕ್ಕಱಙ್ಗೂಱ್ಱಮ್.—ಮೆಲ್ಲಿಯ
ವಾೞೈಕ್ಕುತ್ತಾನೀನ್ಱ ಕಾಯ್ ಕೂಱ್ಱಙ್ಗೂಱ್ಱಮೇ
ಇಲ್ಲಿಱ್ ಕಿಶೈನ್ದೊೞುಗಾ ಪ್ಪೆಣ್.

ಕಲಿಯದ ಮಾನಿಸರ್ಗೆ ಕಲ್ತರಿತವರ ಸೊಲ್
ಮೃತ್ಯು.
ಅಲ್ಲದ ಮಾನಿಸರ್ಗೆ ಅರಮೆ ಮೃತ್ಯು.—ಮೆತ್ತನೆಯ
ಬಾಳೆಗೆ ತಾನ್‌ಪಡೆದ ಕಾಯ್ ಮೃತ್ಯು. ಮೃತ್ಯುವೇ
ಮನೆಬಾಳ್ಗೆಗೊಪ್ಪನಡೆಯಿರದ ಹೆಣ್ಣು.

ಸೊಲ್= ಮಾತು. ಅಲ್ಲದ ಮಾನಿಸರು= ಧರ್ಮವಿರೋಧಿಗಳಾದ, ಧರ್ಮಿಷ್ಠರಲ್ಲದ ಮನುಷ್ಯರು. ಅರೆ=ಧರ್ಮ. ಮನೆಬಾಳ್ಕೆ= ಗೃಹಸ್ಥ ಜೀವನ. ಒಪ್ಪುನಡೆ=ಹೊಂದುವ ನಡವಳಿಕೆ.

೨೮

ಧನಹೋದರೂ ಗುಣಹೋಗದು

ಶನ್ದನ ಮೆನ್ಗುಱಡು ತಾನ್ದೇಯ್‌ನ್ದ ಕಾಲತ್ತುಮ್
ಗನ್ದಙ್ಗುಱೈ ಪಡಾದಾದಲಾಲ್—ತನ್ದನ್
ದನಞ್ಜುಱ್ಱಯರಾಯಿನು ನ್ಱಾ ವೇನ್ದರ್ ಕೇಟ್ಟಾಲ್
ಮನಞ್ಜುಱ್ಱಯರಾವರೋ ಮಱು?

ಚಂದನದ ಮೆದುಗೊರಡು ತಾನ್ ತೇಯ್ದ ಕಾಲದಲೂ
ಗಂಧವಲಿ ಕೊರೆಪಡದು; ಅಂತಾಗಿರೆ—ತಂತಮ್ಮ
ಧನಕಿರಿಯರಾದರೂ ಮಾಲೆಯರಸರು ಕೇಡೊಳ್
ಮನಕಿರಿಯರಾಗುವರೊ ಮತ್ತೆ?

ತೇಯ್ದ ಕಾಲದಲೂ= ತೇಯ್ದು ತೇಯ್ದು ಸಣ್ಣಗಾದಾಗಲೂ. ಕೊರೆಪಡದು= ಕಡಮೆಯಾಗದು. ಕುಂದದು. ಧನಕಿರಿಯರ್: ಧನದಿಂದ ಕಿರಿಯರು, ಸಂಪತ್ತಿನಲ್ಲಿ ಕಡಮೆಯಾದವರು. ಮಾಲೆಯರಸ: ಹೂದಂಡೆ ಧರಿಸಿದ ರಾಜ. ಮನಕಿರಿಯರು= ಮನಸ್ಸಿನಿಂದ ಕಿರಿಯರು, ಉತ್ಸಾಹ ಕುಂದಿದವರು, ಸಣ್ಣ ಮನಸ್ಸಿನವರು.

೨೯

ಲಕ್ಷ್ಮಿ ಬಂದರೆ ಎಲ್ಲಾ ಬರುತ್ತವೆ; ಹೋದರೆ ಎಲ್ಲಾ ಹೋಗುತ್ತವೆ

ಮರುವಿನಿಯ ಶುಱಮುಮ್ ವಾನ್ ಪೊರುಳುಮ್ ನಲ್ಲ
ಉರುವುಮ್ ಉಯರ್ ಕುಲಮುಮೆಲ್ಲಾಮ್–
ತಿರುಮಡನ್ದೈ
ಅಮ್ಪೋದವಳೋಡುಮಾಗುಮ್; ಅವಳ್ ಪಿರಿನ್ದು
ಪೋಮ್ಪೋದವಳೋಡುಮ್ ಪೋಮ್.

ಸೇರ್ದಿನಿಯ ಬಂಧುಗಳು, ಮೇಲು ಧನ, ಸೊಗಸಾದ
ರೂಪ, ಉತ್ತಮದ ಕುಲ ಇವುಗಳೆಲ್ಲ–ಸಿರಿದೇವಿ
ಬರುವಂದು ಅವಳೊಡನೆ ಬರುವುವು; ಅವಳಗಲಿ
ಹೋಗುವಂದವಳೊಡನೆಯೇ ನಡೆವುವು.

ಸೇರ್ದಿನಿಯ ಬಂಧುಗಳು = ವಿಶ್ವಾಸದಿಂದ ಜೊತೆ ಸೇರಿ ಪ್ರಿಯರಾಗಿರುವ ನಂಟರು. ಸಿರಿದೇವಿ= ಲಕ್ಷ್ಮೀದೇವಿ.

೩೦

ತಿಳಿದವರು ಅಪಕಾರಿಗಳಿಗೂ ಉಪಕಾರವನ್ನೇ ಮಾಡುತ್ತಾರೆ

ಶಾನ್ದನೈಯುನ್ದೀಯನವೇ ಶೆಯ್ದಿಡಿನು ನ್ದಾಮವರ್ಕ್ಕೆ
ಆನ್ದನೈಯುಙ್ಗಾಪ್ಪರಱಿವುಡೈಯೋರ್.–ಮಾನ್ದರ್
ಕುಱೈಕ್ಕುನ್ದನೈಯುಙ್ಗುಳಿರ್ ನಿೞಲೈತ್ತನ್ದು
ಮಱೈಕ್ಕುಮಾಙ್ಗಣ್ಡೀರ್ ಮರಮ್.

ಸಾವನಿತು ಕೇಡುಗಳ ಗೈದಿಡೆಯಂ ತಾಮವರ
ನಪ್ಪನಿತು ಕಾಪಿಡುವರರಿವುಳ್ಳವರ್.–ಮಾನವರು
ಕೊರೆದುಕಡಿಕಡಿವನಿತುಂ ತಣ್ಣೆಳಲನವರ್ಗಿತ್ತು
ಮರೆಯ ಕೊಡುವುವು ಕಂಡಿರೇ ಮರಗಳ್.

ಗೈದಿಡೆಯುಂ= ಮತ್ತೆ ಮತ್ತೆ ಮಾಡುತ್ತಿದ್ದರೂ. ಅಪ್ಪನಿತು= ಸಾಧ್ಯವಾದಷ್ಟು. ಕಾಪಿಡು= ರಕ್ಷಣೆಕೊಡು, ಕಾಪಾಡು. ಮರೆ = ರಕ್ಷಣೆ.

ಮುದುವೊರೆ ಮುಗಿಯಿತು

---



## ಸಕ್ಕರೆ ಚರಿತ್ರೆ

**(ಸಕ್ಕರೆ ಕೈಗಾರಿಕೆಯ ಹುಟ್ಟು ಮತ್ತು ಬೆಳವಣಿಗೆಯ ಸಂಕ್ಷಿಪ್ತ ಪರಿಚಯ)**

ಶ್ರೀ ಬಿ.ಎಸ್. ನಾಗಪ್ಪ, ಮಂಡ್ಯ

(ಜುಲೈ ತಿಂಗಳ ಸಂಚಿಕೆಯಿಂದ ಮುಂದುವರಿದುದು)

ನಮ್ಮ ಸಕ್ಕರೆ ಕೈಗಾರಿಕೆಯಲ್ಲಿ ಹೊಸಯುಗ ೧೮೩೪ ರಿಂದ ಆರಂಭವಾಯಿತೆಂದು ಹೇಳಬಹುದು. ೧೮೩೪ರಲ್ಲಿ ವೆಸ್ಟ್ ಇಂಡೀಸ್ ಮತ್ತು ಮಾರಿಷಸ್ ದ್ವೀಪಗಳಲ್ಲಿ ಅಲ್ಲಿಯ ಸರ್ಕಾರ ಗುಲಾಮವ್ಯಾಪಾರವನ್ನು ಕಾನೂನಿನ ಮೂಲಕ ರದ್ದುಗೊಳಿಸಿದುದು ಭಾರತ ಸಕ್ಕರೆ ಕೈಗಾರಿಕೆ ಬೆಳೆಯಲು ಪರೋಕ್ಷವಾಗಿ ತುಂಬಾ ಸಹಾಯವಾಯಿತು. ಗುಲಾಮ ವ್ಯಾಪಾರ ರದ್ದು ಮಾಡಿದಕೂಡಲೇ ಈ ದ್ವೀಪಗಳಲ್ಲಿದ್ದ ಪ್ಲಾಂಟರುಗಳಿಗೆಲ್ಲ ಕೈಕಟ್ಟಿದಂತಾಗಿ, ಇನ್ನು ತಮ್ಮ ಬಂಡವಾಳಕ್ಕೆ ಎಲ್ಲಿ ಧಕ್ಕೆ ಬರುವುದೋ ಎಂದು ಹೆದರಿ ಇದ್ದುಬದ್ದುದನ್ನು ತೆಗೆದುಕೊಂಡು ಭಾರತಕ್ಕೆ ಬರಲಾರಂಭಿಸಿದರು. ಹೀಗೆ ಬಂದವರಲ್ಲಿ ಲಿಯನಾರ್ಡ್ ವ್ರೇ ಎಂಬುವನು ಗೋರಕ್‌ಪುರದಲ್ಲಿ ಒಂದು ಕಬ್ಬಿನ ವ್ಯವಸಾಯ ಕ್ಷೇತ್ರ ತೆರೆದನು. ಅಂಡ್ರೂಸಿಮಿ ಎಂಬುವನು ಪಾಂಡ್ರುನ ಎಂಬಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಿದನು. ತಿರಹಟ್ಟಿನ ಬಗಮತಿ ಎಂಬಲ್ಲಿ ಆರ್ತರ್ ಕ್ರೂಕ್ ಎಂಬುವನು ಸಕ್ಕರೆ ಉದ್ಯಮಕ್ಕೆ ಕೈ ಹಚ್ಚಿದನು. ಸಕ್ಕರೆ ಕೈಗಾರಿಕೆಯಲ್ಲಿ ಪ್ರಸಿದ್ಧ ಎಂಜನಿಯರುಗಳೆನಿಸಿಕೊಂಡಿದ್ದ ಎಸ್. ಹೆಚ್. ರಾಬಿನ್‌ಸನ್ ಮತ್ತು ಕ್ಯಾಪ್ಟನ್ ಸ್ಲಿಮನ್ ಎಂಬುವರು ಒಟ್ಟಿಗೆ ಸೇರಿ ಜಬ್ಬಲ್‌ಪುರದಲ್ಲಿ ಕಬ್ಬಿನ ವ್ಯವಸಾಯ ಕ್ಷೇತ್ರ ಹಾಗೂ ಸಕ್ಕರೆ ಕಾರ್ಖಾನೆ ಸ್ಥಾಪಿಸಿದರು. ಹೀಗೆ ಭಾರತದಲ್ಲಿ ಕ್ರಮೇಣ ಒಂದಾದ ಮೇಲೊಂದು ಸಕ್ಕರೆ ಕಾರ್ಖಾನೆಗಳು ಸ್ಥಾಪಿತವಾಗಿ ತನ್ಮೂಲಕ ಸಕ್ಕರೆ ಉತ್ಪತ್ತಿ ಪ್ರಮಾಣ ಹೆಚ್ಚಿತಲ್ಲದೆ, ವಿದೇಶಗಳಿಗೆ ಸಕ್ಕರೆ ರಫ್ತಿನ ಪ್ರಮಾಣವೂ ಹೆಚ್ಚಿತು. ೧೮೪೦ರಲ್ಲಿ ಭಾರತದಿಂದ ಬ್ರಿಟನ್ನಿಗೆ